ಡಾ॥ ಎ. ವಿ. ನರಸಿಂಹಮೂರ್ತಿ

# 'ಮಾನೌಮಿ ಚೌಪದ'ದಲ್ಲಿ ಉಲ್ಲೇಖಿತವಾಗಿರುವ ನಾಣ್ಯಗಳು

ನಾಣ್ಯಶಾಸ್ತ್ರವು ತನ್ನದೇ ಆದ ಆಕರ ಮತ್ತು ಅಧ್ಯಯನ ವಿಧಾನಗಳನ್ನು ಹೊಂದಿದೆಯಾದರೂ ಶಾಸನಗಳು ಮತ್ತು ಸಾಹಿತ್ಯಿಕ ಗ್ರಂಥಗಳಿಂದ ಆ ಶಾಸ್ತ್ರಕ್ಕೆ ಉಪಯೋಗವಾಗುವ ಹತ್ತಾರು ಅಂಶಗಳು ಇತ್ತೀಚೆಗೆ ಬೆಳಕಿಗೆ ಬರುತ್ತಿವೆ. ಈ ರೀತಿಯ ಅಧ್ಯಯನವು ನಮ್ಮ ದೇಶಕ್ಕೆ ಹೊಸದಾದರೂ ಸಮಾಧಾನದ ಸಂಗತಿಯೆಂದರೆ, ಕೆಲವು ವಿದ್ವಾಂಸರು ಈ ವಿಷಯದ ಕಡೆಗೆ ಗಮನವನ್ನು ಹರಿಸಿರುವುದು. ಶಾಸನಶಾಸ್ತ್ರವು ನಾಣ್ಯಶಾಸ್ತ್ರಕ್ಕೆ ಯಾವ ರೀತಿ ಕೊಡುಗೆಯನ್ನು ನೀಡಬಲ್ಲದು ಎಂಬುದನ್ನು ಇದೇ ಲೇಖಕರು ಬೇರೆಡೆ ತೋರಿಸಿದ್ದಾರೆ.[1] ಅದೇ ರೀತಿಯಲ್ಲಿ, ಕರ್ನಾಟಕ ನಾಣ್ಯಶಾಸ್ತ್ರ ಅಧ್ಯಯನಕ್ಕೆ ಕನ್ನಡ ಸಾಹಿತ್ಯ ಕೃತಿಗಳು ಉಪಯೋಗವಾಗಬಲ್ಲವು ಎಂಬುದನ್ನು ತೋರಿಸುವುದೇ ಈ ಲೇಖನದ ಮುಖ್ಯ ಉದ್ದೇಶ. ಆದಕ್ಕಾಗಿ 'ಮಾನೌಮಿ ಚೌಪದ' ಎಂಬ ಗ್ರಂಥವನ್ನು ಆರಿಸಿಕೊಳ್ಳಲಾಗಿದೆ.[2]

'ಮಾನೌಮಿ ಚೌಪದ' ಅಥವಾ 'ಮಹಾನವಮಿ ಚತುರ್ಪಾದ'ವು ಸುಮಾರು ೧೭೩೦ರಲ್ಲಿ ನಂಜುಂಡಯ್ಯನಿಂದ ರಚಿತವಾದ ಕನ್ನಡ ಕೃತಿ.[3] ಈ ಕವಿಯು ಮೈಸೂರು ಮಹಾರಾಜ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿದ್ದವನು. ಮೈಸೂರು ಅರಮನೆಯ ದಳವಾಯಿ ಮತ್ತು ಸರ್ವಾಧಿಕಾರಿಯಾಗಿದ್ದ ಕಳಲೆ ವೀರಪ್ಪಾಜಿ ಮತ್ತು ಅವನ ಮಗ ದೇವರಾಜನನ್ನೂ ಈ ಕವಿ ಹೆಸರಿಸುತ್ತಾನೆ. ಮಹಾನವಮಿಯ ದಿನ ಹಾಡುವ ಸಲುವಾಗಿ ಬರೆಯಲಾದ ಈ ಪದಗಳು ಬಹಳ ಸರಳವಾಗಿವೆ. ಅರಮನೆಯ ಅನೇಕ ಅಧಿಕಾರಿಗಳನ್ನು ಹೆಸರಿಸುವಾಗ ನಂಜುಂಡಯ್ಯನು ಈ ಗ್ರಂಥದಲ್ಲಿ ಅರಮನೆಯ ಟಂಕಾಧಿಕಾರಿಯಾಗಿದ್ದ ಚಿನವಯ್ಯನನ್ನು ಉಲ್ಲೇಖಿಸಿ, ಅವನಿಗೆ ಟಂಕಶಾಲೆಗಳ ಬಗೆಗೆ ಇದ್ದ ಜ್ಞಾನವನ್ನು ಹೊಗಳುತ್ತಾನೆ. ಆ ಸಂದರ್ಭದಲ್ಲಿ ಅನೇಕ ನಾಣ್ಯಗಳನ್ನೂ ಇವನು ಹೆಸರಿಸುತ್ತಾನೆ.

ಶಿವರಾಯ ವರಾಹ[4] : ಇದು ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಗರಿಷ್ಠ ನಾಣ್ಯ. ವಿಜಯನಗರದ ದೊರೆ ಸದಾಶಿವರಾಯನು ಶಿವ ಮತ್ತು ಪಾರ್ವತಿಯರ ಚಿತ್ರಗಳಿದ್ದ ಚಿನ್ನದ ವರಾಹ ನಾಣ್ಯಗಳನ್ನು ಅಚ್ಚು ಹಾಕಿಸಿದನು.

1. ನೊಬುರು ಕರಾಶಿಮ (ಸಂ.) : ಇಂಡಸ್ ವ್ಯಾಲಿ ಟು ಮೆಕಾಂಗ್ ಡೆಲ್ಟ, ಮದ್ರಾಸು, ೧೯೮೫ : ಈ ಗ್ರಂಥದಲ್ಲಿರುವ ನನ್ನ ಲೇಖನ : 'ದಿ ರೋಲ್ ಆಫ್ ಎಪಿಗ್ರಫಿ ಇನ್ ದಿ ಸ್ಟಡಿ ಆಫ್ ನ್ಯೂಮಿಸ್‌ಮ್ಯಾಟಿಕ್ಸ್', ಪು. ೭೭-೮೬.
2. ನನ್ನ ಗಮನವನ್ನು ಈ ಗ್ರಂಥದ ಕಡೆಗೆ ಸೆಳೆದವರು ಡಾ॥ ಟಿ. ವಿ. ವೆಂಕಟಾಚಲ ಶಾಸ್ತ್ರೀ ಅವರು.
3. ಈ ಗ್ರಂಥವನ್ನು ಡಾ॥ ಅನಂತರಂಗಾಚಾರ್ ಅವರು ಸಂಪಾದಿಸಿದ್ದು, ಮೈಸೂರಿನ ಶಾರದಾ ಮಂದಿರದವರು ಇದನ್ನು ೧೯೭೦ ರಲ್ಲಿ ಪ್ರಕಟಿಸಿದ್ದಾರೆ.
4. ಈ ಗ್ರಂಥದ ಪದ್ಯ ೧೯

ಅವುಗಳ ಹಿಂಭಾಗದಲ್ಲಿ ನಾಗರೀ ಲಿಪಿಯಲ್ಲಿ 'ಶ್ರೀ ಪ್ರತಾಪ ಸದಾಶಿವರಾಯ' ಎಂಬ ಶಾಸನವೂ ಇದೆ. ಈ ಪ್ರತಾಪ ಎನ್ನುವ ಪದದಿಂದ, ಈ ನಾಣ್ಯವು ವಿಜಯ ನಗರದ ಸದಾಶಿವರಾಯನದ್ದೆಂದೂ ಕೆಳದಿಯ ಶಿವಪ್ಪ ನಾಯಕನದು ಅಲ್ಲವೆಂದೂ ಖಚಿತವಾಗಿ ತಿಳಿಯುತ್ತದೆ. ಆದುದರಿಂದ ಈ ಗ್ರಂಥದಲ್ಲಿ ಹೇಳಿರುವ ನಾಣ್ಯವು ವಿಜಯನಗರದ ಮಹಾರಾಜನದ್ದೆಂದು ಸುಲಭವಾಗಿ ಹೇಳಬಹುದು.

ಗೆರುಸೊಪ್ಪೆ ರಾಮಚಂದ್ರ ಜಡೆಯ[5] : ಇದು ಯಾವ ನಾಣ್ಯ ಎಂದು ಖಚಿತವಾಗಿ ಹೇಳುವುದು ಕಷ್ಟ. ಗೇರುಸೊಪ್ಪೆಯಲ್ಲಿ ಆ ಕಾಲದಲ್ಲಿ ಪಾಳೆಯಗಾರರು ಆಳುತ್ತಿದ್ದರು. ಆದುದರಿಂದ ಆ ಪಾಳೆಯಗಾರರ ನಾಣ್ಯ ಇದು ಎಂದು ಊಹಿಸಬಹುದು.

ಗುತ್ತಿ ಹೊನ್ನು : ಕರ್ನಾಟಕದಲ್ಲಿ ಹೊನ್ನು ಎನ್ನುವ ನಾಣ್ಯ ಬಾದಾಮಿಯ ಚಾಲುಕ್ಯರ ಕಾಲ ದಿಂದಲೂ ಬಳಕೆಯಲ್ಲಿದ್ದಿತು. ಅನೇಕ ಶಾಸನಗಳಲ್ಲಿ ಇವುಗಳ ಉಲ್ಲೇಖ ಬರುತ್ತದೆ.[6] ಈ ನಾಣ್ಯ ಹೆಚ್ಚು ಬಳಕೆಗೆ ಬರುವುದು ಕಲ್ಯಾಣದ ಚಾಲುಕ್ಯ ಮತ್ತು ಹೊಯ್ಸಳರ ಕಾಲಗಳಲ್ಲಿ. ಸುಮಾರಾಗಿ ಇದೇ ಕಾಲದಲ್ಲಿ ಈ ನಾಣ್ಯಗಳನ್ನು ಟಂಕಿಸಿದ ಟಂಕಶಾಲೆಗಳ ಊರಿನ ಹೆಸರನ್ನು ಈ ನಾಣ್ಯಗಳ ಜೊತೆಗೂಡಿಸುವುದು ಒಂದು ಹೊಸ ಪದ್ಧತಿಯಾಗಿ ಬೆಳೆಯುತ್ತದೆ. ಲೊಕ್ಕಿ ಗುಂಡಿಯ ನಾಣ್ಯ ಬಾರಕೂರು ಗದ್ಯಾಣ, ಮಂಗಳೂರು ಗದ್ಯಾಣ ಮುಂತಾದ ಉದಾಹರಣೆಗಳು ದೊರಕುತ್ತವೆ. ವಿಜಯನಗರ ಕಾಲದಲ್ಲಿ ಗುತ್ತಿಯಲ್ಲಿ ಒಂದು ಟಂಕಶಾಲೆ ಯಿದ್ದಿತು. ಈ ಟಂಕಶಾಲೆಯಲ್ಲಿ ಮುದ್ರಿತವಾದ ಹೊನ್ನನ್ನು ಗುತ್ತಿಯ ಹೊನ್ನು ಎಂದು ವ್ಯವಹರಿಸು ತ್ತಿದ್ದರು.

ಪಟ್ಟಣದ ಹೊನ್ನು : ಟಿಪ್ಪೂ ಸುಲ್ತಾನನ ಕಾಲ ದಲ್ಲಿ ಶ್ರೀರಂಗಪಟ್ಟಣದಲ್ಲಿ ಒಂದು ಪ್ರಮುಖ ಟಂಕಶಾಲೆ ಯನ್ನು ತೆರೆಯಲಾಯಿತು. ಅಲ್ಲಿ ಟಂಕಿಸಲಾದ ಎಲ್ಲ ನಾಣ್ಯಗಳ ಮೇಲೆಯೂ 'ಪಟ್ಟಣ' ಎನ್ನುವ ಬರಹವನ್ನು ಹಾಕಿಸಲಾಯಿತು. ನಮಗೆ ತಿಳಿದಿರುವಂತೆ ಟಿಪ್ಪೂ ಸುಲ್ತಾನನು ತಾನು ಅಚ್ಚು ಹಾಕಿಸಿದ ಎಲ್ಲ ನಾಣ್ಯಗಳಿಗೂ ಒಂದೊಂದು ಹೊಸ ಹೆಸರನ್ನು ಕೊಟ್ಟನು. ಆದರೆ ಹೊನ್ನುಗಳಿಗೆ ಮಾತ್ರ ಯಾವ ಹೊಸ ಹೆಸರನ್ನೂ ಕೊಡಲಿಲ್ಲ. ಆದುದರಿಂದ ಅವುಗಳು ಪಟ್ಟಣದ ಹೊನ್ನು ಗಳು ಎಂದೇ ಪ್ರಸಿದ್ಧವಾಗಿರಬೇಕು.

ಬೆಣ್ಣೆ ಮುದ್ದೆಯ ನಾಣ್ಯ : ವಿಜಯನಗರ ಕಾಲದಲ್ಲಿ ಕೃಷ್ಣದೇವರಾಯನು ಒರಿಸ್ಸದ ಉದಯಗಿರಿಯ ವಿಜಯದ ಜ್ಞಾಪಕಾರ್ಥವಾಗಿ ಹಂಪಿಯಲ್ಲಿ ಕೃಷ್ಣನ ದೇವಾಲಯವನ್ನು ಸ್ಥಾಪಿಸಿ, ಬಾಲಕೃಷ್ಣನ ಚಿತ್ರವುಳ್ಳ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಇದು ಎಷ್ಟೊಂದು ಜನಪ್ರಿಯ ನಾಣ್ಯವಾಗಿದ್ದಿತೆಂದರೆ, ಈ ನಮೂನೆಯ ನಾಣ್ಯಗಳು ವರಾಹ, ಅರ್ಧವರಾಹ ಮತ್ತು ಕಾಲು ವರಾಹಗಳಲ್ಲಿ ದೊರೆಯುತ್ತವೆ. ಈ ನಾಣ್ಯದ ಮುಂಭಾಗದಲ್ಲಿ ಕುಳಿತಿರುವ ಬಾಲಕೃಷ್ಣನ ಚಿತ್ರವಿದೆ. ಬಾಲಕೃಷ್ಣನು ಬಲಗೈಯಲ್ಲಿ ಬೆಣ್ಣೆಯ ಮುದ್ದೆಯನ್ನು ಹಿಡಿದಿದ್ದಾನೆ. ಹಿಂಭಾಗದಲ್ಲಿ 'ಶ್ರೀ ಪ್ರತಾಪ ಕೃಷ್ಣ ರಾಯ' ಎಂಬ ಬರಹವಿದೆ.[7] ಈ ನಾಣ್ಯವನ್ನು ಗಮನಿಸಿ ದಾಗ ಬೆಣ್ಣೆಯ ಮುದ್ದೆಯು ಎಷ್ಟೊಂದು ಪ್ರಾಮುಖ್ಯತೆ ಯಿಂದ ಚಿತ್ರಿತವಾಗಿದೆ ಎಂಬುದು ಅರಿವಾಗುತ್ತದೆ. ಆದುದರಿಂದ ಈ ನಾಣ್ಯ ಬೆಣ್ಣೆಮುದ್ದೆಯ ನಾಣ್ಯ ಎಂಬ ಹೆಸರಿನಿಂದ ಪ್ರಸಿದ್ಧಿ ಪಡೆಯಿತು.

ಗಜಬೇಂಟೆಕಾರ ಹೊನ್ನು : ವಿಜಯನಗರದ ದೊರೆ ಇಮ್ಮಡಿ ದೇವರಾಯನಿಗೆ ಆನೆಯ ಬೇಟೆಯೆಂದರೆ ಬಲು ಪ್ರೀತಿ. ಗಜಬೇಂಟೆಕಾರ ಎನ್ನುವ ಬಿರುದೂ ಅವನಿಗಿದ್ದಿತು. ಅವನ ಕಾಲದಲ್ಲಿ ವಿಜಯನಗರವನ್ನು ಸಂದರ್ಶಿಸಿದ ಅಬ್ದುರ್ ರಜಾಕನೂ ಈ ವಿಷಯವನ್ನು ತಿಳಿಸುತ್ತಾನೆ. ಇವನಲ್ಲಿ ಒಂದು ಸಾವಿರಕ್ಕೂ ಹೆಚ್ಚು ಆನೆಗಳಿದ್ದವು. ಒಂದೊಂದೂ ಸಣ್ಣ ಪರ್ವತದಂತೆ ಎತ್ತರ

---

5. ಅದೇ, ಪದ್ಯ ೧೯
6. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್, ಸಂ. ೨೦, ಶಾಸನ ೭೬, ೮೨, ೮೫, ೧೦೨, ೧೦೬
7. ಎ. ವಿ. ನರಸಿಂಹಮೂರ್ತಿ : ಕಾಯಿನ್ಸ್ ಆಫ್ ಕರ್ನಾಟಕ, ಪು. ೧೬೨

ವಾಗಿದ್ದು ರಾಕ್ಷಸರಂತೆ ಕ್ರೂರವಾಗಿದ್ದವು ಎನ್ನುವುದು ಅಬ್ದುರ್ ರಜಾಕನ ಮಾತು.[8] ಇಮ್ಮಡಿ ದೇವರಾಯನ ನಾಣ್ಯಗಳನ್ನು ಗಮನಿಸಿದರೆ ಅವನಿಗೆ ಆನೆಗಳ ವಿಷಯ ದಲ್ಲಿದ್ದ ಪ್ರೀತಿ ಖಚಿತವಾಗುತ್ತದೆ. ಈ ನಾಣ್ಯಗಳ ಮುಂಭಾಗದಲ್ಲಿ ಆನೆಯ ಚಿತ್ರವೂ ಹಿಂಭಾಗದಲ್ಲಿ 'ಶ್ರೀ ದೇವರಾಯ ಗಜಬೇಂಟೆಕಾರ' ಎನ್ನುವ ನಾಗರೀ ಲಿಪಿಯ ಬರವಣಿಗೆಯೂ ಇವೆ. ಈ ರೀತಿಯ ನಾಣ್ಯ ಗಳನ್ನು ಇನ್ಯಾವ ರಾಜನೂ ಅಚ್ಚು ಹಾಕಿಸಲಿಲ್ಲ. ಆದುದರಿಂದ ಈ ಹೊನ್ನುಗಳಿಗೆ ಗಜಬೇಂಟೆಕಾರ ಹೊನ್ನು ಎನ್ನುವ ಪ್ರಸಿದ್ಧಿ ಬಂದಿತು.

ರೊಟ್ಟಿ ತಿಮ್ಮನಾಯಕನ ಹೊನ್ನು : ಹೆಸರೇ ತಿಳಿಸುವಂತೆ ಇದು ತಿಮ್ಮನಾಯಕನಿಂದ ಟಂಕಿಸಲ್ಪಟ್ಟ ಹೊನ್ನು. ಆದರೆ ಈ ತಿಮ್ಮನಾಯಕ ಯಾರು ಎಂದು ತೀರ್ಮಾನಿಸುವುದು ಸ್ವಲ್ಪ ಕಷ್ಟ. ಮೈಸೂರು ಒಡೆಯರ ಪರವಾಗಿ ತಿಮ್ಮನಾಯಕ ಎಂಬುವನು ಶ್ರೀರಂಗಪಟ್ಟಣ ದಲ್ಲಿ ಮರಾಠರ ಮೇಲೆ ಯುದ್ಧ ಮಾಡಿದ ಸಂಗತಿ ತಿಳಿದು ಬರುತ್ತದೆ.[9] ಇವನು ಕಾಟಕೆರೆ ಎಂಬ ಸ್ಥಳದಲ್ಲಿ ಆಳು ತ್ತಿದ್ದನು. ಆದುದರಿಂದ ಈ ಹೊನ್ನುಗಳು ಅವನಿಗೆ ಸೇರಿದ್ದವು ಎಂದು ಊಹಿಸಬಹುದು.

ಕೃಷ್ಣನಾಯಕನ ಹೊನ್ನು : ಹೆಸರೇ ಸೂಚಿಸು ವಂತೆ ಇದು ಕೃಷ್ಣನಾಯಕನಿಂದ ಟಂಕಿಸಲ್ಪಟ್ಟ ಹೊನ್ನು. ನಾಯಕ ಎನ್ನುವುದನ್ನು ಗಮನಿಸಿದಾಗ, ಇದು ಆ ಕಾಲದಲ್ಲಿದ್ದ ಯಾವುನಾದರೊಬ್ಬ ಪಾಳೆಯಗಾರನಿಗೆ ಸಂಬಂಧಿಸಿದ್ದಿರಬೇಕೆಂಬ ಊಹೆಯನ್ನು ಮಾಡಬೇಕು. ಮೈಸೂರಿನ ಒಡೆಯರು ಸಾಮಾನ್ಯವಾಗಿ 'ಒಡೆಯರ್' ಎಂಬ ಹೆಸರಿನಿಂದಲೇ ಪ್ರಸಿದ್ಧರಾಗಿದ್ದವರು. ಆದುದ ರಿಂದ ಈ ಕೃಷ್ಣನಾಯಕನು ಮೈಸೂರಿನ ದೊರೆ ಎಂದು ಹೇಳುವುದು ಸ್ವಲ್ಪ ಕಷ್ಟ.[10]

ನರಸೀಪುರದ ಹೊನ್ನು : ಇದು ತಿರುಮಕೂಡ್ಲು ನರಸೀಪುರದಲ್ಲಿ ಟಂಕಿಸಲ್ಪಟ್ಟ ಚಿನ್ನದ ನಾಣ್ಯ. ಆದರೆ ಇದನ್ನು ಅಚ್ಚು ಹಾಕಿಸಿದವರು ಯಾರು ಎಂದು ತಿಳಿಯು ವುದಿಲ್ಲ. ಅದೂ ಅಲ್ಲದೆ ಇಲ್ಲಿ ಟಂಕಿಸಲ್ಪಟ್ಟ ಯಾವ ನಾಣ್ಯವೂ ಇದುವರೆವಿಗೆ ದೊರಕಿಲ್ಲ.

ರಾಮಮುದ್ರಿಕೆ : ಇದು ರಾಮಟಂಕಿ ವರಾಹ. ದಕ್ಷಿಣಭಾರತದಲ್ಲಿ ರಾಮಟಂಕಿ ವರಾಹ ಬಹಳ ಪ್ರಚಾರ ದಲ್ಲಿತ್ತು. ವಿಜಯನಗರದ ಅರಸರಾದ ಆರವೀಡು ಮನೆತನದ ರಾಜರ ಕಾಲದಲ್ಲಿ ಶ್ರೀರಾಮ ಹೆಚ್ಚು ಜನ ಪ್ರಿಯನಾದ ದೇವತೆಯಾಗಿದ್ದನೆಂದು ತಿಳಿಯಬರುತ್ತದೆ. ಒಂದನೆಯ ತಿರುಮಲರಾಯನು ರಾಮಟಂಕಿ ವರಾಹ ಗಳನ್ನು ಮುದ್ರಿಸಿದ ಮೊದಲನೆಯ ವಿಜಯನಗರದ ರಾಜ.[11] ಈ ನಾಣ್ಯಗಳ ಮುಂಭಾಗದಲ್ಲಿ ಪೀಠದ ಮೇಲೆ ಕುಳಿತಿರುವ ಶ್ರೀರಾಮ ಮತ್ತು ಸೀತೆ; ಹಿಂದೆ ಲಕ್ಷ್ಮಣನು ನಿಂತಿದ್ದಾನೆ; ರಾಮನು ಅಭಯಮುದ್ರೆ ಯಲ್ಲಿದ್ದಾನೆ; ಕೆಲವು ನಾಣ್ಯಗಳಲ್ಲಿ ಹನುಮಂತನಿದ್ದಾನೆ. ಈ ನಾಣ್ಯಗಳ ಹಿಂಭಾಗದಲ್ಲಿ 'ಶ್ರೀ ತಿರುಮಲ ರಾಯಲು' ಎಂಬ ನಾಗರೀಲಿಪಿಯ ಬರಹವಿದೆ. ಈ ನಾಣ್ಯಗಳು ರಾಮಟಂಕಿ, ರಾಮಮುದ್ರಿಕೆ, ರಾಮವರಾಹ, ರಾಮನ ಹೊನ್ನು ಮುಂತಾದ ಹೆಸರುಗಳಿಂದ ಪ್ರಸಿದ್ಧವಾಗಿದ್ದವು.

ತಿರುಪತಿ ಹಣ : ತಿರುಪತಿಯಲ್ಲಿ ಟಂಕಿಸಲಾದ ಹಣವೆಂದು ಇದನ್ನು ತಿಳಿಯಬಹುದಾದರೂ ತಿರುಪತಿ ಯಲ್ಲಿ ಯಾರ ಕಾಲದಲ್ಲಿಯೂ ಟಂಕಶಾಲೆಯು ಇರಲಿಲ್ಲ ಎಂಬುದು ಗಮನಾರ್ಹವಾದ ಸಂಗತಿ. ಆದುದರಿಂದ ಈ ನಾಣ್ಯವು ಯಾವುದು ಎಂಬುದನ್ನು ತಿಳಿಯುವುದು ಅವಶ್ಯಕ. ವಿಜಯನಗರದ ದೊರೆ ಕೃಷ್ಣದೇವರಾಯ ನಿಗೆ ತಿರುಪತಿಯ ವೆಂಕಟೇಶ್ವರನಲ್ಲಿ ವಿಶೇಷ ಭಕ್ತಿ ಮತ್ತು ಗೌರವವಿದ್ದಿತು. ಒರಿಸ್ಸದ ಮೇಲೆ ವಿಜಯವನ್ನು

---

8. ರಾಬರ್ಟ್ ಸಿವೆಲ್. : ಎ ಫರ್‌ಗಾಟನ್ ಎಂಪೈರ್, ಪು. ೨೮೧
9. ಸಿ. ಹಯವದನರಾವ್ : ಹಿಸ್ಟರಿ ಆಫ್ ಮೈಸೂರ್, ಸಂ. ೩, ಪು. ೧೯೪
10. ಇವರು ಕೃಷ್ಣರಾಜ, ಕೃಷ್ಣಭೂಪಾಲ, ಕೃಷ್ಣಪ್ರಭು ಎಂಬ ಮುಂತಾದ ಹೆಸರುಗಳಿಂದ ಪ್ರಸಿದ್ಧರಾಗಿದ್ದುದು ತಿಳಿದು ಬರುತ್ತದೆ. ಇವರಲ್ಲಿ ಯಾವ ದೊರೆಯೂ ನಾಯಕ ಎನ್ನುವ ಅಭಿಧಾನದಿಂದ ಪ್ರಸಿದ್ಧಿಗೆ ಬಂದಿದ್ದು ಗಮನಕ್ಕೆ ಬಂದಿಲ್ಲ.
11. ಎ. ವಿ. ನರಸಿಂಹಮೂರ್ತಿ : ಕಾಯಿನ್ಸ್ ಆಫ್ ಕರ್ನಾಟಕ, ಪು. ೧೬೭

ಸಂಪಾದಿಸಿದ ಅನಂತರ ಕೃಷ್ಣದೇವರಾಯನು ತಿರುಪತಿಗೆ ಹೋಗಿ ದೇವರಿಗೆ ಕನಕಾಭಿಷೇಕವನ್ನು ಮಾಡಿದನು. ಇದಕ್ಕಾಗಿ ಅವನು ಚಿನ್ನದ ವರಾಹ ನಾಣ್ಯಗಳನ್ನು ಟಂಕಿಸಿದನು. ಇತರ ವರಾಹ ನಾಣ್ಯಗಳಂತೆ ೫೮ ಗ್ರೇನ್ ತೂಕವಿರದೆ, ಈ ನಾಣ್ಯಗಳು ಅದರ ಎರಡರಷ್ಟು ಅಂದರೆ ೧೧೬–೧೧೭ ಗ್ರೇನ್ ತೂಕದವಾಗಿದ್ದವು.[12] ಈ ನಾಣ್ಯಗಳ ಮುಂಭಾಗದಲ್ಲಿ ಎತ್ತರವಾದ ಕಿರೀಟವನ್ನು ಧರಿಸಿರುವ ಹಾಗೂ ನಿಂತಿರುವ ವೆಂಕಟೇಶ್ವರನ ಚಿತ್ರವಿದೆ. ಇದೇ ರೀತಿಯ ನಾಣ್ಯಗಳನ್ನು ನಾಲ್ಕನೆಯ ಶ್ರೀರಂಗರಾಯನೂ ಟಂಕಿಸಿದನು. ಇವುಗಳು ಗಂಡೀಕೋಟೆಯ ಟಂಕಶಾಲೆಯಲ್ಲಿ ಟಂಕಿಸಲ್ಪಟ್ಟವು. ಇವುಗಳ ಮುಂಭಾಗದಲ್ಲಿ ನಿಂತಿರುವ ವೆಂಕಟೇಶ್ವರನ ಚಿತ್ರವೂ ಹಿಂಭಾಗದಲ್ಲಿ 'ಶ್ರೀವೆಂಕಟೇಶ್ವರಾಯ ನಮಃ' ಎಂಬ ಬರಹವೂ ಇವೆ.[13] ಸಾಮಾನ್ಯವಾಗಿ ಈ ನಾಣ್ಯಗಳು ತಿರುಪತಿಯ ನಾಣ್ಯ, ತಿರುಪತಿಯ ವರಾಹ, ತಿರುಪತಿಯ ಹಣ, ತಿಮ್ಮಪ್ಪನ ಹಣ ಮುಂತಾದ ಹೆಸರುಗಳಿಂದ ಜನಜನಿತವಾಗಿವೆ. ಆದುದರಿಂದ ತಿರುಪತಿಯ ಹಣವು ಕೃಷ್ಣದೇವರಾಯನ ಇಲ್ಲವೇ ನಾಲ್ಕನೆಯ ಶ್ರೀರಂಗರಾಯನಿಂದ ಟಂಕಿಸಲ್ಪಟ್ಟ ಶ್ರೀ ವೆಂಕಟೇಶ್ವರನ ಚಿತ್ರವಿರುವ ನಾಣ್ಯಗಳೆಂಬುದು ಖಚಿತವಾಗುತ್ತದೆ.

ಇಕ್ಕೇರಿ ವರಾಹ : ಕೆಳದಿಯ ನಾಯಕರು ಅಚ್ಚು ಹಾಕಿಸಿದ ನಾಣ್ಯಗಳಲ್ಲಿ ಇಕ್ಕೇರಿ ವರಾಹ ಬಲು ಮುಖ್ಯವಾದುದು. ಕೆಳದಿಯ ರಾಜ ಸದಾಶಿವನಾಯಕನು, ವಿಜಯನಗರದ ಸದಾಶಿವರಾಯನು ಅಚ್ಚು ಹಾಕಿಸಿದ ಚಿನ್ನದ ವರಾಹಗಳ ಮಾದರಿಯನ್ನೇ ಅನುಸರಿಸಿ ಈ ನಾಣ್ಯಗಳನ್ನು ಟಂಕಿಸಿದನು. ಇವುಗಳ ಮುಂಭಾಗದಲ್ಲಿ ಶಿವ-ಪಾರ್ವತಿಯರ ಚಿತ್ರವೂ ಹಿಂಭಾಗದಲ್ಲಿ 'ಶ್ರೀ ಸದಾಶಿವ' ಎಂಬ ನಾಗರೀ ಬರಹವೂ ಇವೆ.[14] ಕೆಳದಿಯ ನಾಣ್ಯಗಳಲ್ಲಿ 'ಪ್ರತಾಪ' ಎನ್ನುವ ಪದವು ಇಲ್ಲದಿರುವುದನ್ನು ಗಮನಿಸಬೇಕು. ಈ ನಾಣ್ಯಗಳು ಇಕ್ಕೇರಿ ವರಾಹಗಳೆಂದೇ ಪ್ರಸಿದ್ಧಿ ಪಡೆದಿವೆ.

ಬಿಳುಗಿ ಚಕ್ರ : ಇದನ್ನು ಗುರುತಿಸುವುದು ಕಷ್ಟ. ಬಹುಶಃ ಇದು ಉತ್ತರಕನ್ನಡದ ಬಿಳಿಗಿ ಅರಸರ ನಾಣ್ಯವಿರಬೇಕೆಂದು ಊಹಿಸಬಹುದು.

ಟೆಂಕಿ : ಮಧ್ಯಕಾಲೀನ ಭಾರತದಲ್ಲಿ 'ಟಂಕ' ಎಂಬ ನಾಣ್ಯವು ಬಲು ಪ್ರಸಿದ್ಧವಾಗಿದ್ದಿತು. ಈ ನಾಣ್ಯದ ಉಲ್ಲೇಖವೇ ಇದು ಎಂದು ಊಹಿಸಬಹುದು.

ಗದ್ಯಾಣ : ಪ್ರಾಚೀನ ಕರ್ನಾಟಕದಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದ ಗದ್ಯಾಣ ಎಂಬ ನಾಣ್ಯವು ಸುಮಾರು ೧೪ನೆಯ ಶತಮಾನದ ಮಧ್ಯಭಾಗದ ಸಮಯಕ್ಕೆ ಅವನತಿಯನ್ನು ಹೊಂದುತ್ತಾ ಹೋಗುತ್ತದೆ. ಅದರ ಬದಲು ವರಾಹ ಪ್ರಸಿದ್ಧಿ ಪಡೆಯುತ್ತದೆ.

ಅಡ್ಡ, ವೀಸ ಮತ್ತು ಬೇಳೆ : ಇವು ಪ್ರಾಚೀನ ಕರ್ನಾಟಕದಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದ ಸಣ್ಣ ನಾಣ್ಯಗಳು. ಬೇಳೆ ಎಂಬ ನಾಣ್ಯ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಅತಿ ಕನಿಷ್ಠವಾದ ನಾಣ್ಯವಾಗಿದ್ದಿತು. ಎರಡು ಬೇಳೆಗಳಿಗೆ ಒಂದು ಹಾಗವು ಸಮನಾಗಿದ್ದಿತು. ಅದೇ ಕಾಲದಲ್ಲಿ ವೀಸವೂ ಬಳಕೆಯಲ್ಲಿದ್ದಿತು. ಒಂದು ಹಾಗಕ್ಕೆ ನಾಲ್ಕು ವೀಸಗಳು ಸಮನಾಗಿದ್ದವು. ದೇವಗಿರಿಯ ಸೇವುಣರ ಕಾಲದಲ್ಲಿಯೂ ವೀಸ ಮತ್ತು ಬೇಳೆಗಳು ಬಳಕೆಯಲ್ಲಿದ್ದವೆಂಬುದು ತಿಳಿದುಬಂದಿದೆ.[15] ಹೊಯ್ಸಳ ಮತ್ತು ವಿಜಯನಗರ ಕಾಲದಲ್ಲಿಯೂ ವೀಸ ಮತ್ತು ಬೇಳೆಗಳು ಅದೇ ಪ್ರಮಾಣದಲ್ಲಿ ಬಳಕೆಯಲ್ಲಿದ್ದವು.[16] ಕೆಳದಿಯ ನಾಯಕರ ಕಾಲದಲ್ಲಿ ಅಡ್ಡ, ವೀಸ ಮತ್ತು ಬೇಳೆ ಎಂಬ ಮೂರು ನಾಣ್ಯಗಳೂ ಬಳಕೆಯಲ್ಲಿದ್ದವು.[17]

---

12. ಅದೇ, ಪು. ೧೬೧
13. ಅದೇ, ಪು. ೧೭೫
14. ಅದೇ, ಪು. ೨೧೩
15. ಅದೇ, ಪು. ೧೦೭
16. ಅದೇ, ಪು. ೧೪೨
17. ಅದೇ, ಪು. ೨೧೨

ಈ ಕಾಲದಲ್ಲಿ ಒಂದು ಅಡ್ಡವು ನಾಲ್ಕು ಬೇಳೆಗಳಿಗೂ ಒಂದು ಬೇಳೆಗೆ ಎರಡು ವೀಸವೂ ಸಮಾನವಾಗಿದ್ದವು. ಈ ನಾಣ್ಯಗಳು ಮೈಸೂರು ಒಡೆಯರ ಕಾಲದಲ್ಲಿಯೂ ಚಲಾವಣೆಯಲ್ಲಿದ್ದವು.

ಕುಣಿಗಲ್ ವರಹಿಯ ನಾಗರ: ಈ ನಾಣ್ಯದ ಅರ್ಥ ತಿಳಿಯುವುದು ಸ್ವಲ್ಪ ಕಷ್ಟವೇ ಸರಿ. ಬಹುಶಃ ಇದು ಕುಣಿಗಲ್ಲಿನಲ್ಲಿದ್ದ ಟಂಕಶಾಲೆಯಲ್ಲಿ ಅಚ್ಚಾದ ಕುಣಿಗಲ್ ಹಣವಿರಬಹುದೆಂದು ಊಹಿಸಬಹುದು.

ಫರಂಗಿ ಪುತ್ಥಳಿ: ಬಹುಶಃ ಇದು ಈಸ್ಟ್ ಇಂಡಿಯಾ ಕಂಪೆನಿಯವರು ಅಚ್ಚು ಹಾಕಿಸಿದ ನಾಣ್ಯವಿರಬೇಕು. 'ಮೂರುಸ್ವಾಮಿ ಪಗೋಡ' ಬಲು ಪ್ರಸಿದ್ಧವಾಗಿದ್ದ ನಾಣ್ಯ. ಆದುದರಿಂದ ಇದು ಇದನ್ನು ಉದ್ದೇಶದಲ್ಲಿಟ್ಟುಕೊಂಡಿರಲೂ ಸಾಕು ಎಂದು ಮಾತ್ರ ಹೇಳಬಹುದು. ಒಟ್ಟಿನಲ್ಲಿ ಇದೊಂದು ಈಸ್ಟ್ ಇಂಡಿಯ ಕಂಪೆನಿಯ ನಾಣ್ಯ.

ಇವುಗಳ ಜೊತೆಗೆ, ಈ ಗ್ರಂಥದಲ್ಲಿ ಕಾಣಬರುವ ಮಾಸುಮೊಳೆ, ಗೂಟುಮೊಳೆ, ಕತ್ತೆವಿಟ, ಆನೆವಿಟ, ಬೊಂಬೆಪುತ್ಥಳಿ ಮತ್ತು ಬಟ್ರೆಮಲೆಯ ಮುಂತಾದ ಪದಗಳನ್ನು ಅರ್ಥೈಸಲು ಸಾಧ್ಯವಿಲ್ಲ. ಈ ರೀತಿ 'ಮಾನೌಮಿ ಚೌಪದ'ವು ನಾಣ್ಯಶಾಸ್ತ್ರದ ವಿಷಯದಲ್ಲಿ ಬಲು ಉಪಯುಕ್ತವಾದ ಮಾಹಿತಿಯನ್ನು ಒದಗಿಸುತ್ತದೆ.



ಉಡುಪಿ ತಾಲ್ಲೂಕಿನ ಭಂಡಿಮಠವೆಂಬಲ್ಲಿ ದೊರೆತ ನೂತನಶಿಲಾಯುಗದ ಕೊಡಲಿ (ಪು. ೩೪-೩೫)